# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

೧೦ನೇ ವರ್ಷ ೯ನೇ ಸಂಚಿಕೆ ಬೆಲೆ ರೂ ೧-೦೦

ಕೊಪ್ಪ ೯-೬-೧೯೯೧ ಭಾನುವಾರ ದೂರವಾಣಿ : ೧೧೪

## ಹರಿಹರಪುರದ ಅನಿಲ್ ಕುಮಾರ್‌ಗೆ ಪಿಯುಸಿಯಲ್ಲಿ ೮ನೇ ರ್ಯಾಂಕ್

ಹರಿಹರಪುರ: ಇಲ್ಲಿನ ಅ. ರಾ. ಸ ಕಿರಿಯ ಕಾಲೇಜಿನ ವಿದ್ಯಾರ್ಥಿ ಕೆ. ಎನ್. ಅನಿಲ್‌ಕುಮಾರ್ ಈ ಬಾರಿಯ ಎರಡನೇ ಪಿಯುಸಿ ಪರೀಕ್ಷೆಯಲ್ಲಿ ರಾಜ್ಯಕ್ಕೆ ೮ನೇ ರ್ಯಾಂಕ್ ಗಳಿಸಿದ್ದಾನೆ.

ಐಚ್ಛಿಕ ಕಲಾ ವಿದ್ಯಾರ್ಥಿಯಾದ ಈತ ೬೦೦ಕ್ಕೆ ೪೯೨ ಅಂಕಗಳೊಂದಿಗೆ ಶೇ. ೮೨ ಅಂಶ ಗಳಿಸಿದ್ದಾನೆ.

೧೯೭೭ರಲ್ಲಿ ಶೃಂಗೇರಿ ಕಾಲೇಜಿನಲ್ಲಿ ಎ. ವಿ. ಕೃಷ್ಣಮೂರ್ತಿ ಎಂಬ ವಿಜ್ಞಾನ ವಿದ್ಯಾರ್ಥಿ ೧೦ನೇ ರ್ಯಾಂಕ್ ಗಳಿಸಿದ್ದರು. ಅನಂತರದ ಈ ೧೪ ವರ್ಷಗಳಲ್ಲಿ ಪಿಯುಸಿಯಲ್ಲಿ ಜಿಲ್ಲೆಗೆ ರ್ಯಾಂಕ್ ಬಂದಿರುವುದು ಇದೇ ಮೊದಲು ಎಂದು ತಿಳಿದುಬಂದಿದೆ.

ಆರಂಭದಿಂದಲೂ ಅತ್ಯಂತ ಪ್ರತಿಭಾವಂತ ವಿದ್ಯಾರ್ಥಿಯಾದ ಅನಿಲ್, ಏಳನೇ ತರಗತಿ ಮತ್ತು ಎಸ್ಸೆಸ್ಸೆಲ್ಸಿಯಲ್ಲಿ ಶಾಲೆಗೆ ಮೊದಲ ಸ್ಥಾನವನ್ನೂ, ಎಸ್ಸೆಸ್ಸೆಲ್ಸಿಯಲ್ಲಿ ಜಿಲ್ಲೆಗೆ ೫ನೇ ಸ್ಥಾನವನ್ನೂ ಗಳಿಸಿದ್ದ.

ಸಾಮಾನ್ಯ ಶಿಕ್ಷಣವಲ್ಲದೆ, 'ಕಂಪ್ಯೂಟರ್ ಅಪ್ಲಿಕೇಶನ್'ನಲ್ಲಿ ಡಿಪ್ಲೊಮಾ ಹಾಗೂ ಇಂಗ್ಲಿಷ್ ಬೆರಳಚ್ಚು ಪ್ರೌಢ ಪರೀಕ್ಷೆಯನ್ನೂ ಮುಗಿಸಿದ್ದಾನೆ.

**ಸಾಮಾಜಿಕ, ಸಾಂಸ್ಕೃತಿಕ ಚಟುವಟಿಕೆ**

ವೈದ್ಯಕೀಯ ಶಿಬಿರಗಳಲ್ಲಿ ಸ್ವಯಂಸೇವಕನಾಗಿ ಹಾಗೂ ರಾಷ್ಟ್ರೋತ್ಥಾನ ಬಳಗದ ಸಕ್ರಿಯ ಕಾರ್ಯಕರ್ತನಾದ ಅನಿಲ್ ಪರಿಸರ ಚಳುವಳಿಗಳಲ್ಲೂ ಸಕ್ರಿಯವಾಗಿ ಭಾಗವಹಿಸುತ್ತಿದ್ದಾನೆ

೧೯೯೦-೯೧ರ ಕಾಲೇಜು ವಾರ್ಷಿಕೋತ್ಸವದಲ್ಲಿ ೫೬ ಸಾಂಸ್ಕೃತಿಕ ಸ್ಪರ್ಧೆಗಳನ್ನು ಸಂಘಟಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದ್ದ. ಚರ್ಚೆ, ಪ್ರಬಂಧ, ಸ್ವರಚಿತ ಕವನ ವಾಚನ, ಸಾಮಾನ್ಯಜ್ಞಾನ, ರಸಪ್ರಶ್ನೆ ಮತ್ತು ಇತರ ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ರಾಜ್ಯಮಟ್ಟದವರೆಗೂ ಅನೇಕ ಬಹುಮಾನಗಳನ್ನು ಗಳಿಸಿರುವ ಈತ, ಪತ್ರಿಕೆಗಳಿಗೆ ವರದಿ, ಲೇಖನ, ಪತ್ರ ಬರೆಯುವ ಹವ್ಯಾಸಿಯೂ ಹೌದು.

**ಇತರ ಆಸಕ್ತಿಗಳು, ಪ್ರಶಸ್ತಿಗಳು**

ಬಾಲ್ ಬ್ಯಾಡ್ಮಿಂಟನ್ ಮತ್ತು ಕ್ರಿಕೆಟ್ ಆಟಗಳಲ್ಲೂ ಮುಂದಿರುವ ಅನಿಲ್, ದಕ್ಷಿಣ ಕನ್ನಡದಲ್ಲಿ ನಡೆದ ರಾಜ್ಯ ಮಟ್ಟದ ಎನ್.ಎಸ್.ಎಸ್. ಶಿಬಿರದಲ್ಲಿ "೨ನೇ ಅತ್ಯುತ್ತಮ ಸ್ವಯಂಸೇವಕ" ಎಂಬ ಪ್ರಶಸ್ತಿ ಗಳಿಸಿದ್ದಾನೆ. ಶಾಲಾ ಮಟ್ಟದಲ್ಲಿ, ೧೯೯೦-೯೧ನೇ ಸಾಲಿನ ದಿ|| ಅಣ್ಣಪ್ಪ ಪೈ ಸ್ಮಾರಕ "ವರ್ಷದ ವಿದ್ಯಾರ್ಥಿ" ಪ್ರಶಸ್ತಿಗೂ ಪಾತ್ರನಾಗಿದ್ದ.

ಅದೇ ಕಾಲೇಜಿನ ಉಪನ್ಯಾಸಕರೂ, ಸ್ವತಃ ಅಪಾರ ಪ್ರತಿಭಾವಂತರೂ, ಸಾಮಾಜಿಕ ಕಾರ್ಯಕರ್ತರೂ ಆದ ಕೆ. ಜಿ. ಎನ್. ಶಾಸ್ತ್ರಿ ಅನಿಲನ ತಂದೆ. "ಚೈತನ್ಯವನ" ಶಿಶುಮಂದಿರದ ಕಾರ್ಯದರ್ಶಿಣಿ ಶ್ರೀಮತಿ ವಿಮಲಾ ಶಾಸ್ತ್ರಿ ಈತನ ತಾಯಿ.

ಈ ಬಹುಮುಖ ಪ್ರತಿಭೆಯ ಉದಯೋನ್ಮುಖ ವಿದ್ಯಾರ್ಥಿ ಇನ್ನೂ ಹೆಚ್ಚು ಹೆಚ್ಚಿನ ಯಶಸ್ಸು ಗಳಿಸಿ, ದೇಶದ (ಸಾಮಾನ್ಯ ಜನತೆಯ ಪಾಲಿನ) ದೊಡ್ಡ ಆಸ್ತಿಯಾಗಲೆಂದು 'ಮುಂಜಾವು' ಹಾರೈಕೆ.

(ವರದಿ : ಜೆ. ಎಸ್. ಶ್ರೀನಿಧಿ)

### ಎಲ್ಲೆಲ್ಲೂ ಮತದಾರರ ನಿರಾಸಕ್ತಿ, ಕೆಲವೆಡೆ ಚುನಾವಣೆಗೆ ಬಹಿಷ್ಕಾರ

# ಜಿಲ್ಲೆಯಲ್ಲಿ ಮತದಾನ ಕೇವಲ ಶೇ. ೫೪.೬

**ಚಿಕ್ಕಮಗಳೂರು : ೧೦ನೇ ಲೋಕಸಭಾ ಚುನಾವಣೆಯಲ್ಲಿ ಈ ಕ್ಷೇತ್ರದಲ್ಲಿ ಕೇವಲ ಶೇ. ೫೪.೬ ರಷ್ಟು ಮತದಾನ ಆಗಿದೆ. ಮತದಾನ ಬಹುತೇಕ ಶಾಂತಿಯುತವಾಗಿದ್ದರೂ, ಎಲ್ಲೆಡೆ ಮತಗಟ್ಟೆಗಳು ಭಣಗುಟ್ಟುತ್ತಿದ್ದವು. ಮತದಾರರಲ್ಲಿ ಮಾತ್ರವಲ್ಲ, ರಾಜಕೀಯ ಪಕ್ಷಗಳ ಕಾರ್ಯಕರ್ತರಲ್ಲಿ ಕೂಡ ತೀವ್ರ ನಿರುತ್ಸಾಹ, ನಿರಾಸಕ್ತಿ ಕಂಡು ಬಂತು.**

ಚಲಾಯಿತವಾದ ಇಷ್ಟು ಕಡಿಮೆ ಶೇಕಡಾವಾರಿನಲ್ಲೂ ಯಥೇಚ್ಛವಾಗಿ ನಕಲಿ ಮತ ಚಲಾವಣೆ ನಡೆದಿರುವುದಾಗಿ ವರದಿಯಾಗಿದೆ. ಮೂಡಿಗೆರೆಯ ಮತಗಟ್ಟೆಯೊಂದರಲ್ಲಿ ೬೬ ಮಂದಿ ಹರಿಜನರ ಮತಗಳನ್ನ ಬೆಳಗ್ಗೆಯೇ ಬೇರೆಯವರು ಚಲಾಯಿಸಿದ್ದರು

**ಮಹಿಳೆಯರ, ಮುಸ್ಲಿಮರ ನಿರಾಸಕ್ತಿ**

ಈ ಬಾರಿ ಮಹಿಳೆಯರು ಮತ್ತು ಮುಸ್ಲಿಮರು ಅತಿ ಕಡಿಮೆ ಸಂಖ್ಯೆಯಲ್ಲಿ ಓಟು ಹಾಕಿದ್ದಾರೆ. ಹಲವು ಕಡೆಗಳಲ್ಲಿ ಕೃಷಿ ಕಾರ್ಮಿಕರ ಹಾಜರಾತಿ ಕೂಡ 'ಬಹಳ ಕಮ್ಮಿ' ಯಿತ್ತು.

ಕಡಿಮೆ ಮತದಾನವಾಗಿರುವುದರ ಲಾಭ-ನಷ್ಟದ ಚರ್ಚೆ ವಿವಿಧ ಪಕ್ಷಗಳಲ್ಲಿ ಬಿರುಸಾಗಿ ನಡೆದಿದೆ.

ಕಾಂಗ್ರೆಸ್ (ಐ)ಗೆ ಖಾಯಂ ಆಗಿ ಬೀಳುತ್ತಿದ್ದ ಮುಸ್ಲಿಮರ ಮತ್ತು ಕೃಷಿ ಕಾರ್ಮಿಕರ ಓಟುಗಳು ಈ ಬಾರಿ ಅತಿ ಕಡಿಮೆ ಸಂಖ್ಯೆಯಲ್ಲಿ ಬಿದ್ದದ್ದು; ಚಲಾವಣೆಯಾದ ಓಟುಗಳಲ್ಲಿ ಹೆಚ್ಚಿನವು ಸಿಪಿಐಗೇ ಬಿದ್ದಿವೆಯೆಂದು ಬಿ. ಕೆ. ಸುಂದರೇಶ್ ಲೆಕ್ಕಾಚಾರ ಹಾಕಿದರೆ, ಬಿಜೆಪಿಯ ಮಂಜುನಾಥ ಕಾಮತ್ ಕೂಡ ಲೆಕ್ಕಾಚಾರವನ್ನು ಮುಂದಿಡುತ್ತ, ಜೊತೆಗೆ, ತಮ್ಮ ಪಕ್ಷದ ಬಗ್ಗೆ ಒಲವುಳ್ಳ "ಪ್ರಜ್ಞಾವಂತ" ಮತದಾರರೆಲ್ಲ ಓಟು ಚಲಾಯಿಸಿದ್ದಾರೆ ಎನ್ನುತ್ತಾರೆ.

**ಶೇಕಡಾವಾರು ವಿವರ**

ಬೆಳ್ತಂಗಡಿ ೫೭.೧೦, ಕಾರ್ಕಳ ೫೬.೧೭, ಶೃಂಗೇರಿ ೫೬.೯೪, ಮೂಡಿಗೆರೆ ೫೩.೧೧, ಚಿಕ್ಕಮಗಳೂರು ೪೭.೯೭, ಬೀರೂರು ೫೬.೯೬; ಕಡೂರು ೫೭.೩೮, ತರೀಕೆರೆ ೫೬.೯೧. ಒಟ್ಟು ೫೪.೬೦.

## ೫ ಗ್ರಾಮಗಳಲ್ಲಿ ಮತದಾನ ಬಹಿಷ್ಕಾರ

ಜಿಲ್ಲೆಯ ೫ ಗ್ರಾಮಗಳಲ್ಲಿ ತಮ್ಮ ಪ್ರಮುಖ ಬೇಡಿಕೆಗಳು ಈಡೇರುವ ತನಕ ಮತ ಚಲಾವಣೆಗೆ ನಕಾರ ಸೂಚಿಸಿದ ಗ್ರಾಮಸ್ಥರು ಒಂದು ಮತವನ್ನು ಚಲಾಯಿಸಲಿಲ್ಲ.

ಮತದಾನದ ದಿನ ಬಂದರೂ ತಮ್ಮ ಪಟ್ಟು ಸಡಿಲಿಸದೇ ದೃಢನಿಲುವು ತೆಗೆದುಕೊಂಡಿದ್ದು ಈ ಚುನಾವಣೆಯ ವಿಶೇಷವಾಗಿತ್ತು.

**ಆರೋಗ್ಯ ಕೇಂದ್ರ ಬೇಕು**

ಕಡೂರು ತಾಲ್ಲೂಕು ಹೋಚಿಹಳ್ಳಿ ಗ್ರಾಮದಲ್ಲಿ ಪ್ರಾಥಮಿಕ ಆರೋಗ್ಯಕೇಂದ್ರ ಹಾಗೂ ಗ್ರಾಮದ ಇತರೇ ಹತ್ತು ಬೇಡಿಕೆಗಳನ್ನು ಮುಂದಿಟ್ಟಿರುವ ಗ್ರಾಮಸ್ಥರು ತಮ್ಮ ಮತಗಳನ್ನು ಚಲಾಯಿಸಲೇ ಇಲ್ಲ. ಇಲ್ಲಿ ಸುಮಾರು ೧೦೩೫ ಮತದಾರರಿದ್ದರು.

ಕಡೂರು ಕ್ಷೇತ್ರದ ಶಾಸಕ ಎಂ. ವೀರಭದ್ರಪ್ಪ ಹಾಗೂ ವಿವಿಧ ಪಕ್ಷಗಳ ನೇತಾರರು ಈ ಗ್ರಾಮಕ್ಕೆ ಭೇಟಿ ನೀಡಿ ಗ್ರಾಮಸ್ಥರ ಮನವೊಲಿಸಲು ಪ್ರಯತ್ನಿಸಿದ್ದರೂ ಪ್ರಯೋಜನವಾಗಲಿಲ್ಲ. ಇದು ಜಿಲ್ಲಾ ಪರಿಷತ್ ಮಾಜಿ ಅಧ್ಯಕ್ಷ ಕೆ. ಎಂ. ಕೃಷ್ಣಮೂರ್ತಿಯವರ ಊರು.

**ಓಟು ಕೊಟ್ಟರೆ ದಂಡ**

ಹಣ ಪಡೆದು ಓಟು ನೀಡುವ ಸಂಗತಿ ಹಳೆಯದಾದರೆ, ಓಟು ಕೊಟ್ಟವರಿಗೆ ದಂಡ ವಿಧಿಸುವ ವಿನೂತನ ಕ್ರಮ ಈ ಬಾರಿ ಹೋಚಿಹಳ್ಳಿಯಲ್ಲಿ ಕಂಡು ಬಂದ ವಿಶೇಷತೆ

ತಮ್ಮ ಗ್ರಾಮದ ಬೇಡಿಕೆಗಳನ್ನು ಈಡೇರಿಸದ ರಾಜಕೀಯ ಪಕ್ಷಗಳಿಗೆ ಬುದ್ಧಿ ಕಲಿಸಲು ಗ್ರಾಮಸ್ಥರು ತೆಗೆದುಕೊಂಡಿರುವ ನಿರ್ಣಯ ಹುಬ್ಬೇರಿಸುವಂಥದ್ದು!

ಯಾರಾದರೂ ಅಪ್ಪಿ-ತಪ್ಪಿ ಮತ ಚಲಾಯಿಸಿದರೆ ೫೧ ರೂ, ಹಾಗೂ ಚುನಾವಣೆ ಪ್ರಚಾರದಲ್ಲಿ ಭಾಗವಹಿಸಿದವರಿಗೆ ಮತ್ತು ಗ್ರಾಮದಲ್ಲಿ ಹೊಸದಾಗಿ ಸಾರಾಯಿ ಅಂಗಡಿ ತೆರೆಯಲು ಸ್ಥಳವನ್ನು ಬಾಡಿಗೆಗೆ ಕೊಟ್ಟವರಿಗೆ ತಲಾ ೧೦೧ ರೂ. ದಂಡ ವಿಧಿಸಲು ಗ್ರಾಮಸ್ಥರು ನಿರ್ಧರಿಸಿದ್ದರು. ಸಾರಾಯಿ ಕುಡಿದರೆ ೫೧ ರೂ. ದಂಡ!

ಈ ನಿರ್ಧಾರದ ಕಾರಣ ಇಲ್ಲಿ ಹೊಸ ಸಾರಾಯಿ ಅಂಗಡಿ ತಲೆ ಎತ್ತಿಲ್ಲ. ಚುನಾವಣಾ ಪ್ರಚಾರವೂ ನಡೆಯಲಿಲ್ಲ. ಮತದಾನ ಕೂಡಾ ಸಂಜೆ ತನಕ ನಡೆಯಲೇ ಇಲ್ಲ

**ಕೂಡು ರಸ್ತೆ ನೀಡಿ ಮತ ಕೇಳಿ**

ಕಡೂರು ತಾಲ್ಲೂಕಿನ ಬೀರನಹಳ್ಳಿಯಲ್ಲಿ ಬಹುಪಾಲು ಮತದಾರರು ಮತದಾನದಿಂದ ಹೊರಗುಳಿದರು.

ಮತ್ತಿಘಟ್ಟದಿಂದ ಬೀರನಹಳ್ಳಿ ತಾಂಡ್ಯಕ್ಕೆ ಹೋಗಲು ವ್ಯವಸ್ಥಿತ ಕೂಡು ರಸ್ತೆ ಒದಗಿಸುವಲ್ಲಿ ಜನ ಪ್ರತಿನಿಧಿಗಳು ವಿಫಲರಾದ ಹಿನ್ನೆಲೆಯಲ್ಲಿ ಮತದಾನ ಬಹಿಷ್ಕಾರ ನಡೆದಿದೆ.

೬೬೮ ಮತದಾರರಲ್ಲಿ ಕೇವಲ ಏಳು ಮಂದಿ ಮಾತ್ರ ಚಲಾಯಿಸಿದ್ದಾರೆ. ಈ ಮತಗಟ್ಟೆ ವ್ಯಾಪ್ತಿಗೆ ಕಾರೇಹಳ್ಳಿ, ದಾಸರಹಳ್ಳಿ ತಾಂಡ್ಯದವರೂ ಸೇರಿದ್ದಾರೆ.

ಮೂಡಿಗೆರೆ ತಾಲ್ಲೂಕು ಫಲ್ಗುಣಿಯಲ್ಲಿಯೂ ಬಹುಪಾಲು ಮತದಾರರು ಮತ ಚಲಾಯಿಸಲಿಲ್ಲ. ತಮಗೆ ನಿಗದಿ ಮಾಡಿದ್ದ ಹಳಿಕೆ ಮತಗಟ್ಟೆ ೫ ಕಿ.ಮೀ. ದೂರವಿರುವುದೆಂದೂ, ಹತ್ತಿರದ ಸಬ್ಬೇನಹಳ್ಳಿಯಲ್ಲಿ ಮತ ಚಲಾಯಿಸಲು ಅನುವು ಮಾಡಿಕೊಡುವಂತೆಯೂ ಒಂದು ದಿನ ಮುಂಚಿತವಾಗಿಯೇ ಗ್ರಾಮಸ್ಥರು ಸಹಾಯಕ ಚುನಾವಣಾ ಅಧಿಕಾರಿಗಳಿಗೆ ಮನವಿ ನೀಡಿದ್ದರೂ ಅದನ್ನು ಪುರಸ್ಕರಿಸಲಿಲ್ಲ ಎನ್ನಲಾಗಿದೆ.

ಈ ಹಿನ್ನೆಲೆಯಲ್ಲಿ ಫಲ್ಗುಣಿಯ ೨೭೭ ಮತದಾರರಲ್ಲಿ ಕೇವಲ ೧೧ ಜನ ಮಾತ್ರ ಮತ ಚಲಾಯಿಸಿದ್ದಾರೆ.

## 'ಬದುಕು ಬಳಗ'ದಲ್ಲಿ ಚರ್ಚೆ

ಕೊಪ್ಪ : ಇಲ್ಲಿನ 'ಬದುಕು ಬಳಗ'ದ ಆಶ್ರಯದಲ್ಲಿ ಚರ್ಚೆ : "ಕನ್ನಡ ಮತ್ತು ಕರ್ನಾಟಕದ ಸಮಸ್ಯೆಗಳು ಹಾಗೂ ಪರಿಹಾರ ಮಾರ್ಗ". ಮಾತನಾಡುತ್ತಾರೆ ಬಂಜಗೆರೆ ಜಯಪ್ರಕಾಶ್. ದಿನಾಂಕ : ೨೩-೬-೯೧ನೇ ಭಾನುವಾರ ಬೆಳಿಗ್ಗೆ ೧೦.೩೦ಕ್ಕೆ. ಸ್ಥಳ: ಟೌನ್ ಶಾಲೆ ಆವರಣ (ಮಹಿಳಾ ಸಮಾಜದ ಪಕ್ಕ), ಕೊಪ್ಪ. ಬಳಗದ ಸದಸ್ಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲು ಕೋರಿದೆ. ಇತರ ಆಸಕ್ತರಿಗೂ ಆಹ್ವಾನವಿದೆ.

## ರೇಡಿಯೋ ಸಂದರ್ಶನ

ಪಿಯುಸಿಯಲ್ಲಿ ೮ನೇ ರ್ಯಾಂಕ್ ವಿಜೇತ ಹರಿಹರಪುರದ ಕೆ.ಎನ್. ಅನಿಲ್‌ನ ಸಂದರ್ಶನ ಜೂನ್ ೧೫ರ ರಾತ್ರಿ ೮.೧೦ಕ್ಕೆ ಭದ್ರಾವತಿಯ 'ಯುವವಾಣಿ' ಕಾರ್ಯಕ್ರಮದಲ್ಲಿ ಪ್ರಸಾರವಾಗಲಿದೆ.

# ಇಸ್ಪೀಟ್ ಎಂಬ ಮದ್ದಿಲ್ಲದ 'ಮಾರಿ' ....

● ವೈ. ಗ. ಜಗದೀಶ್

ಇಸ್ಪೀಟ್ ಆಟ ಒಂದು ರೀತಿಯ ಮೋಜಿನ, ಕಾಲಹರಣ ಮಾಡುವ ಆಟವಾಗಿ ಪ್ರಚಲಿತವಿರುವಂತೆ, ಎಷ್ಟೋ ಸುಂದರ ಸಂಸಾರಗಳನ್ನು ನುಂಗಿ ನೀರು ಕುಡಿದ ಬಕಾಸುರತನಕ್ಕೂ ಪ್ರಸಿದ್ಧಿ. ಗೊತ್ತಿದ್ದೂ ಗೊತ್ತಿದ್ದೂ ಈ ದುಶ್ಚಟಕ್ಕೆ ಬಲಿಬಿದ್ದವರು, ಬೀಳುತ್ತಿರುವವರು ಕಡಿಮೆಯೇನಲ್ಲ. ಇವರಲ್ಲಿ ಕೆಲವರನ್ನು ಮನೆಮಠ ಕಳೆದುಕೊಂಡು ಬೀದಿಪಾಲಾಗಿಸಿದರೆ, ಮತ್ತೆ ಕೆಲವರು ಶ್ರೀಮಂತಿಕೆಯ ಅಟ್ಟಹಾಸದಲ್ಲಿ ಬೀಗುತ್ತಿದ್ದವರನ್ನು ಬಡತನಕ್ಕೆ ತಂದಿಟ್ಟು ಅಣಕಿಸುವಂತೆ ಮಾಡಿದೆ ಈ 'ಮನರಂಜನೆ'ಯ ಆಟ.

ಆದರಲ್ಲಿಯೂ ಮೇಲ್ವರ್ಗದ ಬ್ರಾಹ್ಮಣ ಸಮುದಾಯದಲ್ಲಿ ಇದರ ಹಾವಳಿ ಹೇಳತೀರದು. ಸಮಾರಂಭ, 'ಪಾರ್ಟಿ'ಗಳ ಅಧಿದೇವತೆಯಾದ 'ಮದ್ಯ'ದಂತೆ, ಇವರಲ್ಲಿ ಮದುವೆಯಿರಲಿ, ಪುಸ್ತವಿರಲಿ, ಹುಟ್ಟುಹಬ್ಬವಿರಲಿ, ವಡೆಯೂಟವೇ ಇರಲಿ— ಈ ಇಸ್ಪೀಟ್ 'ಪಾರಾಯಣ'ವಿಲ್ಲದಿದ್ದರೆ ಎಂಥ ಮೃಷ್ಟಾನ್ನ ಭೋಜನ ಕೂಡ ಸಪ್ಪೆಯೇ. ಊಟಕ್ಕೆ ಬರುವುದಕ್ಕಿಂತ ಈ ಪಾರಾಯಣಕ್ಕೆ ಬರುವವರೇ ಜಾಸ್ತಿ ಎನ್ನಬಹುದು. ಪೂಜೆ ಪುನಸ್ಕಾರಗಳೆಲ್ಲ ಕೇವಲ ಪಿಳ್ಳೆನೆವವಾಗಿ ರಾತ್ರಿ–ಬೆಳಗೂ ಈ ಇಸ್ಪೀಟ್ ರಾಜ–ರಾಣಿಯರೇ ರಾರಾಜಿಸುತ್ತಾರೆ ರಾತ್ರಿಯಿಡೀ ಗಮ್ಮತ್ತೇ ಗಮ್ಮತ್ತು. ಬೆಳಗಾಗುವಾಗ ಕೆಲವರು ತಮ್ಮ ಖಾಲಿ ಜೇಬನ್ನು ನೆನಪಿಸಿ ಹ್ಯಾಪುಮೋರೆ ಹಾಕಿಕೊಂಡರೆ ಕೆಲವರು ಹಣ ತುಂಬಿದ ಜೇಬನ್ನು ತಡವರಿಸುತ್ತಲೇ ಸಾಗುತ್ತಾರೆ.

ಇನ್ನೊಂದು ತಮಾಷೆಯ ವಿಷಯ ಇಲ್ಲಿ ಹೇಳಲೇಬೇಕು. ಹೊರಗೆಲ್ಲಾ (ಬಸ್ಸಿನಲ್ಲಿ ದಾರಿಯಲ್ಲಿ) ಸಾಕಷ್ಟು ಮಡಿಮೈಲಿಗೆಯನ್ನು ಆಚರಣೆಯಲ್ಲಿ ಇಟ್ಟುಕೊಂಡಿರುವ ಮಹಾನುಭಾವರು ಕೂಡ, ತಾವು ದೂರೀಕರಿಸುವ ಮಂದಿಯೊಂದಿಗೇ ಹೊಗೆಸೊಪ್ಪು ಅಕ್ಕುತ್ತಾ, ತಮ್ಮ ಮಡಿವಂತಿಕೆ, ಶಾಸ್ತ್ರಗಳಿಗೆ ತರ್ಪಣವಿತ್ತು (ಅದನ್ನು ಆಚರಿಸಬೇಕೆಂದೇನೂ ಅಲ್ಲ) ಪಿಡಿ ಜಪ್ಪುತ್ತಾರೆ. ಎಲ್ಲವನ್ನೂ ಮರೆಸಿಬಿಡುವ ವಿಶಿಷ್ಟ ಮಾದಕತೆ, ಆಕರ್ಷಣೆ ಈ ಸುಡುಗಾಡು ಆಟದ್ದು !

ಹೀಗೆ ಜನಸಾಮಾನ್ಯನ ಮನೆ ತೊಳೆಯಬಲ್ಲ 'ಪುಟಗೋಸಿ' ಆಟವೇ ಒಂದೆಡೆಯಾದರೆ, ಪ್ರತಿಷ್ಠಿತರೆನ್ನಿಸಿಕೊಂಡ ಶ್ರೀಮಂತರು, ರಾಜಕೀಯ ವ್ಯಕ್ತಿಗಳು, ಅಧಿಕಾರಿಗಳ ಕಳ್ಳರ ಕೂಟದ ನಡುವೆ ನಡೆಯುವ ಆಟದ ಮೋಜೇ ಮತ್ತೊಂದು ಥರ. ಇದು ಕಡಿಮೆಯೆಂದರೆ ಒಂದು ಆಟಕ್ಕೆ ೮೦ ರೂ.ನಿಂದ ೧೦೦೦ ದ ವರೆಗೂ ಇರುತ್ತದಂತೆ ಇವರುಗಳೆಲ್ಲ ತಮ್ಮ ಅಧಿಕಾರಾವಧಿಯ ಉದ್ದಕ್ಕೂ ಜನಸೇವೆಯ ಹೆಸರಿನಲ್ಲಿ, ತಮ್ಮೊಳಗೆ ಸ್ವಹಿತ ಕಾರ್ಯ ಸಾಧಿಸಿಕೊಳ್ಳುತ್ತಾ ಕಬಳಿಸಿದ್ದನ್ನು ಹೀಗೆ ಮಜ ಉಡಾಯಿಸುತ್ತಾರೆ ಅದೇನು ಬೆವರಿಳಿಸಿ ಕಷ್ಟಪಟ್ಟು ದುಡಿದ ದುಡ್ಡಲ್ಲವಲ್ಲ ! ಕೆಲವೊಮ್ಮೆ ಈ ದೊಡ್ಡವರ ನಡುವೆ ಅಗತ್ಯವಾಗಿಯೋ, ಅನಿವಾರ್ಯವಾಗಿಯೋ ಕೆಲವು ಬಡಪಾಯಿಗಳು, ಶ್ರಮಜೀವಿಗಳು ಸಹ ತೂರಿಕೊಂಡು ನುಜ್ಜಾಗುವುದೂ ಉಂಟು.

ಇಸ್ಪೀಟ್‌ನಂಥ ವ್ಯಸನಗಳೇ ಆದ ಮಟ್ಕ, ಜೂಜು, 'ಓಸಿ', ಗ್ರಾಮೀಣ ಆಟವಾದ ಕೋಳಿ ಅಂಕ, ಇವುಗಳನ್ನೆಲ್ಲ ನಿಷೇಧಿಸಿದ ನಮ್ಮ ಕಾನೂನು ವ್ಯವಸ್ಥೆ, ಈ ಆಟಕ್ಕೆ ಮಾತ್ರ ನಿರ್ಬಂಧಿತ (ಪರವಾನಗಿ ನೀಡುವುದರ ಮೂಲಕ) ಅವಕಾಶ ನೀಡಿರುವುದಕ್ಕೆ ಬಹುಶಃ ಇದು ಶ್ರೀಮಂತರ, ರಾಜಕಾರಣಿಗಳ, ಅಧಿಕಾರಿಗಳ ಮೋಜಿನ ಆಟವಾಗಿರುವುದೇ ಕಾರಣವೇನೋ?

ಈ ಪಿಡುಗು ನಮ್ಮ ಸಮಾಜದ ಯಾವ ಸ್ತರಗಳಲ್ಲಿ ಯಾವ ರೀತಿ ಹಬ್ಬಿದೆ; ಮತ್ತು ನಮ್ಮ ಯುವ ಜನರ ಮೇಲೆ ಯಾವ ರೀತಿಯ ದುಷ್ಪರಿಣಾಮ ಬೀರುತ್ತಿದೆ ಎಂಬುದನ್ನು ಚರ್ಚೆಗೆ ಒಳಪಡಿಸುವುದು ಈ ಲೇಖನದ ಉದ್ದೇಶ.

ಈ ದುರಭ್ಯಾಸಗಳ ಪ್ರಭಾವ ಹೇಗಿದೆಯೆಂದರೆ, ಇಂದಿನ ಸಮಾಜದಲ್ಲಿ ಈ ರೀತಿಯ (ಇಸ್ಪೀಟ್, ಸಿಗರೇಟು) ದುರ್ವ್ಯಸನಗಳಿಲ್ಲದ ಯಾವನೊಬ್ಬ ವ್ಯಕ್ತಿ, ಯಾತಕ್ಕೂ ಉಪಯೋಗವಿಲ್ಲೆಂದೊ, 'ಶುದ್ಧ ಶುಂಠಿ'ಯೆಂದೋ ಕರೆಸಿಕೊಳ್ಳುತ್ತ ನಿರ್ಲಿಪ್ತರಾಗಿ ಬಿಡುವುದೋ, ಇಲ್ಲಾ ಅನಿವಾರ್ಯವಾಗಿ ತನ್ನ ಹಿರಿಯಣ್ಣನ ಚಾಳಿಯನ್ನೇ ತೊಡಗಿಸಿಕೊಂಡು ಪ್ರವಾಹದಲ್ಲಿ ಸೇರಿಬಿಡುವುದು. ಇದು ದಿನನಿತ್ಯ ಕಾಣಬರುವ ಪ್ರಸಂಗ. ಇದು ಪ್ರತಿಯೊಬ್ಬರು ಆತಂಕಪಡಬೇಕಾದ ವಿಷಯ.

ಅಲ್ಲದೇ ಇವತ್ತಿನ ಯುವ ಸಮೂಹ ತನ್ನ ಬೌದ್ಧಿಕ, ಶಾರೀರಿಕ ಬೆಳವಣಿಗೆಯಲ್ಲಿ ಸಹಕರಿಸಬಲ್ಲ ಹವ್ಯಾಸಗಳಲ್ಲಿ ತೊಡಗಿಸಿಕೊಳ್ಳುವುದು ಬಿಟ್ಟು, ತಮ್ಮ ವ್ಯಕ್ತಿತ್ವವನ್ನೇ ನಾಶಮಾಡಬಲ್ಲಂತಹ ಈ ರೀತಿಯ ದುಶ್ಚಟಗಳತ್ತ ಒಲಿಯುತ್ತಿರುವುದು ದುರಂತ. ಈಗ ಇದು ಬ್ರಾಹ್ಮಣರಲ್ಲಿ ಮಾತ್ರ ಎನ್ನುವಂತೆಯೂ ಇಲ್ಲ. ಮೇಲ್ಮಧ್ಯಮ ಮತ್ತು ಕೆಳ ಮಧ್ಯಮ ಸ್ತರದ ಎಲ್ಲ ಜಾತಿಗಳವರಲ್ಲೂ, ಜೊತೆಗೆ ಬಹುತೇಕ ಯುವ ಜನರಲ್ಲೂ ಈ ವ್ಯಸನ ಮಾದಕ ವಸ್ತುಗಳ ವ್ಯಸನದಂತೆಯೇ ವ್ಯಾಪಕವಾಗಿ ಹಬ್ಬುತ್ತಿದೆ. ಮೇಲುಸ್ತರದಲ್ಲಂತೂ ಕೇಳುವುದೇ ಬೇಡ. ಇದಕ್ಕೆ ಕಾರಣವನ್ನು ಕಂಡು ಹಿಡಿಯಲು ಕಷ್ಟವೇನಿಲ್ಲ. ಒಂದು, ಮೇಲಿನಂತೆ ಅನಿವಾರ್ಯವಾದರೆ, ಮತ್ತೊಂದು, ತಿಳಿಹೇಳಬೇಕಾದ ಹಿರಿಯರೇ ಈ ರೀತಿಯ ದುಶ್ಚಟಗಳ ದಾಸರಾಗಿರುವುದೂ ಕಾರಣವಿರಬಹುದು.

ಇಡೀ ಸಮಾಜದಲ್ಲಿ, ಜನರ ಮನವನ್ನು, ಮನೆಯನ್ನು ನಾಶಮಾಡಬಲ್ಲ ಈ ಅನಿಷ್ಟ ಪಿಡುಗಿನ ಬಗ್ಗೆ, ಭವಿಷ್ಯದ ಕಾಳಜಿಯುಳ್ಳ ಪ್ರತಿಯೊಬ್ಬರೂ, ಅಲ್ಲದೆ ಭಾವೀ ಜಗತ್ತಿನ ಯಜಮಾನರಾದ ಯುವ ಜನತೆ ಎಚ್ಚರವಹಿಸದಿದ್ದರೆ, ಹಾಗೂ ಅದನ್ನು ಒದ್ದೋಡಿಸಲು ಶ್ರಮಿಸದಿದ್ದರೆ ಇದು ಇಡೀ ಸಮಾಜವನ್ನೇ ನುಂಗಬಲ್ಲ ಮಾರಿಯಾಗಬಹುದು. ●

ಎರಡು ಚುಟುಕಗಳು

### ಸೋಮಾರಿ

ಹಸಿದವರ ಕಂಡು
ಹೊಟ್ಟೆ ತುಂಬಿದ ಜನ
ಸೃಷ್ಟಿಸಿದ ಪದ
'ಸೋಮಾರಿಗಳು'

### ಪರಿವರ್ತನೆ

ಕಪ್ಪು ಜನ
ಬಿಳಿ ಹಣವ
ಉತ್ಪಾದಿಸಿದರೆ
ಬಿಳಿ ಜನರ ಕೈಯಲ್ಲದು
ಕಪ್ಪಾಯಿತು

—'ಸಿರಾಲ'

## ರೇಷ್ಮೆ: ಸಣ್ಣ ಬೆಳೆಗಾರರಿಗೆ ಮಾರುಕಟ್ಟೆ ವಿಮಂಚನೆಗೆ ಕೊನೆಎಂದು ?

ಪ್ರಿಯರೆ,

ಸರ್ಕಾರದಿಂದ ಚಿಕ್ಕಮಗಳೂರು ಜಿಲ್ಲೆ ರೇಷ್ಮೆಯ ಬೈವೋಲ್ಟೈನ್ ತಳಿಯ ಬೀಜೋತ್ಪತ್ತಿ ಪ್ರದೇಶವೆಂದು (ಸೀಡ್ ಏರಿಯಾ) ಘೋಷಿಸಲ್ಪಟ್ಟಿದ್ದು, ಇಲ್ಲಿ ಬೆಳೆದ ರೇಷ್ಮೆಯನ್ನು 'ಬೀಜ'ವೆಂದು ಹಾಸನ ರೇಷ್ಮೆ ಮಾರುಕಟ್ಟೆಯಲ್ಲಿ ಮಾರುಕಟ್ಟೆಯಲ್ಲಿ ಮಾರುವುದು ಕಡ್ಡಾಯವಾಗಿದೆ. ಆದರೆ ಅಲ್ಲಿ 50–100 ಕಿಲೋ ತಂದವರ ಮಾಲನ್ನು ಬೇಗ ವ್ಯಾಪಾರ ಮಾಡಿಸಿ ಕೂಡಲೇ ಪಾವತಿ ಕೊಟ್ಟು ಕಳಿಸಲಾಗುತ್ತೆ. ಆದರೆ ಹೆಚ್ಚಿನವರು 10–15 20 ಕಿಲೋ ಒಯ್ದವರೇ ಆಗಿದ್ದು, 2–3 ದಿನ ಮಾಲು ಇಟ್ಟುಕೊಂಡು ಕಾಯಬೇಕಾಗುತ್ತೆ. ಅಷ್ಟಾದರೂ ಕೂಡಲೇ ಹಣ ಸಿಗುವುದಿಲ್ಲ. ಎಂಟೋ ಹತ್ತೋ ದಿನ ಬಿಟ್ಟು ಬರಲು ಹೇಳುತ್ತಾರೆ. ಆ ತಾರೀಖನ್ನಾದರೂ ನಮ್ಮ ಮಾರಾಟದ ರಸೀದಿಯಲ್ಲಿ ನಮೂದಿಸುವುದಿಲ್ಲ. ಆ ದಿನ ಹೋದರೆ ಪುನಃ ತಕರಾರು ಮಾಡಿ ಹಣ ಕೊಡದೆ ಸತಾಯಿಸುತ್ತಾರೆ. ಪಟ್ಟು ಹಿಡಿದು ಒತ್ತಾಯಿಸಿದರೆ ಸಂಜೆ 4 ಗಂಟೆಯ ಹೊತ್ತಿಗೆ ಚೆಕ್ ಕೊಟ್ಟು ಬಿಡುತ್ತಾರೆ. ಮತ್ತೂ ಒಂದು ದಿನ ವ್ಯರ್ಥ.

ಸಣ್ಣ ಬೆಳೆಗಾರರ ಮಾಲು ಸ್ವಲ್ಪ ಬೇಗನೇ ಬಿಕರಿಯಾಗುವಂತೆ ಸಹಕರಿಸಿ, ಕೂಡಲೇ ಹಣವನ್ನು, ಕಡೇ ಪಕ್ಷ ಮುಂದಿನ ತಾರೀಖು ಹಾಕಿದ (ಪೋಸ್ಟ್ ಡೇಟೆಡ್) ಚೆಕ್ಕನ್ನಾದರೂ ಅಂದೇ ಕೊಟ್ಟು ಕಳಿಸಬಾರದೆ ? ಕೇವಲ ಬಸ್ ಚಾರ್ಜಿಗೇ 55 ರೂ. ಖರ್ಚು ಮಾಡಿ, ಒಂದೆರಡು ಸಾವಿರ ರೂಪಾಯಿಗಳಿಗಾಗಿ ಎಷ್ಟು ತಿರುಗಾಟ, ಎಷ್ಟು ದಿನ ಕಾಯುವ ಕರ್ಮ ?

ಅದೇ ಮಾಲನ್ನು ಬೆಂಗಳೂರಿನಂಥ ಕಡೆಗೊಯ್ದು ಅನಧಿಕೃತವಾಗಿ ಮಾರುವುದಾದರೆ ಬಸ್‌ಸ್ಟ್ಯಾಂಡ್ ಅಜುಬಾಜಿನಲ್ಲೇ, ಕೆಲವೇ ಗಂಟೆಗಳಲ್ಲಿ ಕಿಲೋಗೆ 200 ರೂ.ಗಳಂತೆ (ಬೀಜಕ್ಕೆ ಸರ್ಕಾರಿ ದರ ಗರಿಷ್ಠ 183.00 ರೂ. ಇದೆ.) ಖರ್ಚಾಗುತ್ತೆ. ಆದರೆ ಇದರ ಬಗ್ಗೆ ಇಲಾಖೆಗೆ ನಾವು ಮಾರಾಟದ ದಾಖಲಾತಿ ಒದಗಿಸಲಾಗದಿರುವುದರಿಂದ ನಮ್ಮ ಮೇಲೆ ಮೊಕದ್ದಮೆ ಹಾಕಿ ಹಿಂಸೆ ಕೊಡಲು ಅವಕಾಶವಿದೆ.

ಇಷ್ಟು ಕಟ್ಟುನಿಟ್ಟು ಇರುವಾಗ, ಮಾರಾಟದ ವ್ಯವಸ್ಥೆಗೂ ಅಷ್ಟೇ ಅನುಕೂಲಕರ ವ್ಯವಸ್ಥೆ ಇಲ್ಲವಾದರೆ, ಇಷ್ಟು ದೂರದ ಸಣ್ಣ ರೈತರು ರೇಷ್ಮೆ ಬೆಳೆ ಯಾಕೆ ಕೈಗೊಳ್ಳ

## ಓದುಗರ ಪತ್ರಗಳು

ಬೇಕು ? ಈಚೆಗೆ ಕೊಪ್ಪದಲ್ಲಿ ಶಾಸಕ ಶಾಮಣ್ಣನವರ ಅಧ್ಯಕ್ಷತೆಯಲ್ಲಿ ಸಣ್ಣ ಬೆಳೆಗಾರರಿಗೆ ಚಂದ್ರಿಕೆ ಮುಂತಾದುವನ್ನು ಹಂಚುವ ಕಾರ್ಯಕ್ರಮ ನಡೆದಾಗ, ಪಿ.ಜಿ ಗುರ್ಜರ್, ಬಿ.ಜಿ. ಚಿದಂಬರ್ ಮುಂತಾದ ಗಣ್ಯರ ಸಮ್ಮುಖದಲ್ಲೇ ಈ ಕುರಿತು ಸಣ್ಣ ಬೆಳೆಗಾರರು ಮನವಿ ಮಾಡಿ, ಈ ಸಮಸ್ಯೆ ಪರಿಹರಿಸುವಂತೆ ಕೇಳಿಕೊಂಡಿದ್ದರೂ, ಈ ಶೋಷಣೆ ಇನ್ನೂ ನಿಂತಿಲ್ಲ. ಸಂಬಂಧಿತರು ಇತ್ತ ಗಮನ ಹರಿಸುವರೆ ?

—ಎಂ. ಎಲ್. ರಾಮಚಂದ್ರ ರಾವ್
ಸಿಗದಾಳು.

## ಕೊಪ್ಪದಲ್ಲಿ ಜೇನು ಸಾಕಾಣಿಕೆ ಕಛೇರಿ ಇರುವುದೇ ಎಷ್ಟೋ ಜನರಿಗೆ ತಿಳಿದಿಲ್ಲ !

ಕೊಪ್ಪದಲ್ಲಿ ಹತ್ತು ತಿಂಗಳಿಂದಲೂ ಜೇನು ಸಂರಕ್ಷಕರ ಹುದ್ದೆ. ಖಾಲಿ ಇದೆ. ಈ ಹಿಂದೆ ಇಬ್ಬರು ಸಿಬ್ಬಂದಿಗಳಲ್ಲಿ ಒಬ್ಬರಿಗೆ ನಿವೃತ್ತಿಯಾಗಿದ್ದು ಮತ್ತೊಬ್ಬರಿಗೆ ವರ್ಗವಾಗಿದೆ. ಸದ್ಯಕ್ಕೆ ಬೀಗ ಹಾಕಿದ್ದರೂ ಕೂಡ ಆಗೊಮ್ಮೆ ಈಗೊಮ್ಮೆ ಶೃಂಗೇರಿಯ ಜೇನು ಸಂರಕ್ಷಣಾಧಿಕಾರಿಗಳು ಭೇಟಿ ಕೊಡುವುದಿದೆ. ಶೃಂಗೇರಿ, ಜಯಪುರ ಹಾಗೂ ಕೊಪ್ಪದ ಕೇಂದ್ರಗಳ ಜವಾಬ್ದಾರಿಯನ್ನು ಇವರೊಬ್ಬರೇ ಹೊತ್ತುಕೊಂಡಿದ್ದು ಈ ಬಗ್ಗೆ ಹೇಳಿ ಉಪಯೋಗವಿಲ್ಲ.

ಸರ್ಕಾರವು ಕೃಷಿ ಸಂಬಂಧಿತ ಕೆಲಸ–ಕಾರ್ಯ ಇನ್ನಿತರ ಖರ್ಚಿಂದು ಕೋಟಿಗಟ್ಟಲೆ ಹಣ ಖರ್ಚು ಮಾಡುತ್ತಿದೆ. ಪ್ರಕೃತಿಗೆ–ಕೃಷಿಗೆ ಅತ್ಯಂತ ಪೂರಕವಾದ ಇಡೀ ಮಾನವ ಜನಾಂಗಕ್ಕೆಲ್ಲ ಅತೀ ಉಪಯುಕ್ತವಾದ ಈ ಜೇನು ಸಾಕಣೆ ಮತ್ತು ಜೇನು ಇಲಾಖೆಯ ಬಗ್ಗೆ ನಿಗಾ ಕೊಡುತ್ತಿಲ್ಲವೆನ್ನುವುದಕ್ಕೆ ಇದೊಂದು ಜೀವಂತ ಸಾಕ್ಷಿ. ಆದರಲ್ಲೂ ತಾಲ್ಲೂಕಿಗೆ ಕೇವಲ ಎರಡು ಸಿಬ್ಬಂದಿಯನ್ನು ಹೊಂದಿರುವ ಈ ಇಲಾಖೆಯು

(೩ನೇ ಪುಟಕ್ಕೆ)

## ತುಂಡು ಭೂಮಿ ಕಾಯ್ದೆ ತಿದ್ದುಪಡಿ ಬಗ್ಗೆ ತಿಳಿಸಿ

ಪ್ರಿಯರೆ,

ಈಚೆಗೆ ಶಾಸಕರು ಸಾರ್ವಜನಿಕ ಸಭೆಯೊಂದರಲ್ಲಿ ತಮ್ಮ ಮತ್ತು ತಮ್ಮ ಸರ್ಕಾರದ ಸಾಧನೆಗಳ ಬಗ್ಗೆ ಮಾತಾಡುತ್ತ, 'ತುಂಡು ಭೂಮಿ ಕಾಯಿದೆ'ಗೆ ತಿದ್ದುಪಡಿ ಕುರಿತು ಹೇಳಿಕೊಂಡಿದ್ದಾರೆ. ಸದರಿ ತಿದ್ದುಪಡಿ ಯಾವಾಗ ಆಯಿತು, ಯಾವಾಗಿನಿಂದ ಜಾರಿಯಲ್ಲಿದೆ ಮತ್ತು ಅದರ ಸ್ವರೂಪವೇನು ಎಂಬ ಬಗ್ಗೆ ಸ್ವಲ್ಪ ಹೆಚ್ಚಿನ ಮಾಹಿತಿ ಪ್ರಕಟಿಸಿ.

—ಲಕ್ಷ್ಮೀನಾರಾಯಣ, ಕಿಗ್ಗ.

['ತುಂಡು ಭೂಮಿ ಕಾಯಿದೆ' ರದ್ದಾಗಿದೆ. ಈಗ ಆಸ್ತಿ (ಭೂಮಿ)ಯನ್ನು ಎಷ್ಟು ಸಣ್ಣ ತುಣುಕನ್ನಾಗಿ ಕೂಡ ಹಂಚಿಕೊಂಡು ರಿಜಿಸ್ಟರ್ ಮಾಡಿಸಬಹುದು ಮುಂಚಿನಂತೆ ಒಂದು ಎಕರೆಗಿಂತ ಸಣ್ಣ ವಿಭಾಗ ಮಾಡಬಾರದು ಎಂಬ ನಿಬಂಧನೆ ಈಗಿಲ್ಲ. ಹೆಚ್ಚಿನ ವಿವರಗಳನ್ನು ತಹಸೀಲ್ದಾರ್ ಅಥವಾ ಇನ್ನಿತರ ಸಂಬಂಧಿತ ಅಧಿಕಾರಿಗಳಲ್ಲಿ ವಿಚಾರಿಸಬಹುದು —ಸಂ.]

### ಓದುಗರ ಪತ್ರಗಳು

## 'ಇಂಗ್ಲಿಷ್ ಶಾಲೆಗೆ ಮಾನ್ಯತೆಗಾಗಿ ಪ್ರಯತ್ನಿಸಿ'

ಪ್ರಿಯರೆ,

ಕೊಪ್ಪದಲ್ಲಿ ಅತಿ ಹುಮ್ಮಸ್ಸಿನಿಂದ ನಡೆಯುತ್ತಿರುವ ಇಂಗ್ಲಿಷ್ ಮಾಧ್ಯಮ ಪ್ರಾಥಮಿಕ ಶಾಲೆ 'ಶಾರದಾ ವಿದ್ಯಾ ಮಂದಿರ'ಕ್ಕೆ ಇನ್ನೂ ಸರಕಾರದಿಂದ ಮಾನ್ಯತೆ ದೊರೆಯದೆ ಇರುವುದು ವಿಷಾದಕರ. ಈ ಶಾಲೆ ಕುರಿತು ಕೊಪ್ಪ ಮಂಡಲ ಪ್ರಧಾನರು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆ ಹೊರಡಿಸಿದ್ದಾರೆ. ಇದು, ಪ್ರಧಾನರು ತಮ್ಮ ಪ್ರದೇಶಕ್ಕೆ ಸಂಬಂಧಿಸಿದಂತೆ ಮಾಡಬೇಕಾದ ಕಾರ್ಯವೇನೋ ಸರಿ. ಅದರ ಜೊತೆಗೆ, ಈ ಶಾಲೆಗೆ ಸರಕಾರದಿಂದ ಮಾನ್ಯತೆ ಸಿಗುವಂತೆ ಮಾಡಬೇಕಾದ ಅನಿವಾರ್ಯತೆಯೂ ಸಹ ಇದೆ.

ಕೊಪ್ಪ ತಾಲ್ಲೂಕಿನಲ್ಲಿ ಬಹಳಷ್ಟು ಪ್ರಾಥಮಿಕ ಶಾಲೆಗಳಿವೆ. ಕೊಪ್ಪ ಪಟ್ಟಣದಲ್ಲಿಯೇ ಆರು ಪ್ರಾಥಮಿಕ ಶಾಲೆಗಳು ಇದ್ದು, ಇವೆಲ್ಲವೂ ಕನ್ನಡ ಮಾಧ್ಯಮದ ಶಾಲೆಗಳೇ ಆಗಿವೆ. ಇಷ್ಟು ಕನ್ನಡ ಮಾಧ್ಯಮ ಶಾಲೆಗಳ ಮಧ್ಯೆ ಒಂದು ಇಂಗ್ಲಿಷ್ ಮಾಧ್ಯಮ ಶಾಲೆ ಇರುವುದರ ಬಗ್ಗೆ ಇರುವ ಸಮಸ್ಯೆಯಾದರೂ ಏನು? ಅಭಿವೃದ್ಧಿ ಹಾದಿಯಲ್ಲಿ ಬೆಳೆಯುತ್ತಿರುವ, ಅದೂ ಅಲ್ಲದೆ ತಾಲ್ಲೂಕು ಕೇಂದ್ರವಾದ ಕೊಪ್ಪದಲ್ಲಿ ಒಂದಾದರೂ ಇಂಗ್ಲಿಷ್ ಮಾಧ್ಯಮ ಶಾಲೆ ಇರಲೇಬೇಕು. ಸರಕಾರ ಇದೇ (ಜೂನ್) ತಿಂಗಳೊಳಗೆ ಇಂಗ್ಲಿಷ್ ಮಾಧ್ಯಮ ಶಾಲೆಗಳ ಮಾನ್ಯತೆಯ ಬಗ್ಗೆ ನಿರ್ಧಾರ ತೆಗೆದುಕೊಳ್ಳಲಿದೆ ಎಂದು ಶಿಕ್ಷಣ ಸಚಿವರು ಹೇಳಿರುವ ಈ ಸಂದರ್ಭದಲ್ಲಿ, ನಮ್ಮ ಮಂಡಲ ಪಂಚಾಯಿತಿ ಸದಸ್ಯರು, ಪ್ರಧಾನರು, ಶಾಸಕರು, ಸಂಬಂಧಪಟ್ಟ ಹಿರಿಯ ಅಧಿಕಾರಿಗಳು, ಪಟ್ಟಣದ ಹಿರಿಯ ವ್ಯಕ್ತಿಗಳೆಲ್ಲ ಒಟ್ಟಾಗಿ ಜಿಲ್ಲಾ ಪರಿಷತ್ ಮತ್ತು ಸರಕಾರದ ಮೇಲೆ ಒತ್ತಾಯ ಹೇರಿ, ಪ್ರಸ್ತುತ ಶಾಲೆಗೆ ಮಾನ್ಯತೆ ಸಿಗುವಂತೆ ಪ್ರಯತ್ನಿಸಬೇಕಾಗಿ ವಿನಂತಿ.

—ಜುಬೇರ್ ಅಹಮದ್,
ಕೊಪ್ಪ.

## ಕೊಪ್ಪದಲ್ಲಿ ಜೇನು ಸಾಕಣೆ

(೩ನೇ ಪುಟದಿಂದ)

೧೦ ತಿಂಗಳಿಂದ ಬಾಗಿಲು ಮುಚ್ಚಿಕೊಂಡಿದ್ದರೂ ಸಿಬ್ಬಂದಿಯನ್ನು ನೇಮಿಸುವ ಬಗ್ಗೆ ಉದಾಸೀನವನ್ನು ನೋಡಿದಲ್ಲಿ ಸಂಬಂಧಪಟ್ಟವರ (ಬೇ)ಜವಾಬ್ದಾರಿತನ ಅರ್ಥವಾಗುತ್ತದೆ. ಇನ್ನೊಂದು ವಿಶೇಷವೆಂದರೆ, ಬಹುಶಃ ಕೊಪ್ಪ ತಾಲ್ಲೂಕಿನ ಶೇ. ೯೯ ಜನರಿಗೆ ಕೊಪ್ಪದಲ್ಲೊಂದು 'ಜೇನು ಸಂರಕ್ಷಣಾ ಕಛೇರಿ' ಇದೆ, ಇದರಿಂದ ಮಾರ್ಗದರ್ಶನ ಪಡೆಯಬಹುದು ಎಂದೇ ತಿಳಿದಿಲ್ಲ. ಶೀಘ್ರವೇ ಸಂಬಂಧಿಸಿದವರು ಈ ಬಗ್ಗೆ ನಿಗಾ ವಹಿಸಿ ಖಾಯಂ ಸಿಬ್ಬಂದಿ ನೇಮಿಸಿ ಈ ಇಲಾಖೆಯ ಅಸ್ತಿತ್ವದ ಬಗ್ಗೆ ಸಾರ್ವಜನಿಕರಲ್ಲಿ ಅರಿವು ಮೂಡಿಸುವುದು ಅಗತ್ಯವಾಗಿದೆ. ಜೊತೆಗೆ ಈ ಇಲಾಖೆಯ ಬೋರ್ಡನ್ನು ಕನ್ನಡದಲ್ಲಿ ಬರೆದು ಸಾರ್ವಜನಿಕರಿಗೆ ಕಾಣುವಂತೆ ತೂಗು ಹಾಕಿದಲ್ಲಿ ಕೊನೇಪಕ್ಷ ಇಲಾಖೆ ಎಲ್ಲಿದೆ ಎಂಬುದಾದರೂ ತಿಳಿಯುತ್ತದೆ. •

—ವಸಂತ್ ಕುಮಾರ್ ಹರ್ಡೀಕರ್,
ಕೊಪ್ಪ.

### 'ಮಾರಿಹಬ್ಬ' ಬೀದಿ ನಾಟಕ — ಮಳೆಯಲ್ಲೂ ಯಶಸ್ವಿ ಪ್ರದರ್ಶನ; ಆದರೆ

# ಚುನಾವಣೆ ಭ್ರಮೆಗೆ ಮತ್ತೆ ಶ್ರೀಸಾಮಾನ್ಯನನ್ನು ಒಗ್ಗಿಸುವ ಹತಾಶ ಯತ್ನ ?

ಕಳೆದ ವಾರ ಕೊಪ್ಪದಲ್ಲಿ ಚಿಕ್ಕಮಗಳೂರಿನ 'ಭೂಮಿಕಾ' ತಂಡದವರಿಂದ 'ಮಾರಿಹಬ್ಬ' ಎಂಬ ಬೀದಿ ನಾಟಕ ಪ್ರದರ್ಶನ ನಡೆಯಿತು ಕೊಪ್ಪ ಜೇಸಿ ಮತ್ತು ಬ್ಯಾಂಕರ್ಸ್ ರಿಕ್ರಿಯೇಶನ್ ಕ್ಲಬ್‌ನವರ ಸಂಯುಕ್ತ ಆಶ್ರಯದ ಈ ಕಾರ್ಯಕ್ರಮ ನಿಗದಿಯಾದಂತೆ ಕೊಪ್ಪದ ಮೂರು ಬೇರೆ ಬೇರೆ ಕಡೆ ನಡೆಯಲು ಧಾರಾಕಾರ ಮಳೆ ಅವಕಾಶವನ್ನೇ ನೀಡಲಿಲ್ಲ. ಹೀಗಾಗಿ, ಮಧ್ಯಾಹ್ನ ಕರ್ನಾಟಕ ಬ್ಯಾಂಕ್ ಬಳಿ ಹಾಗೂ ಸಂಜೆ ಟೌನ್ ಶಾಲೆಯಲ್ಲಿ—ಹೀಗೆ ಎರಡು ಪ್ರದರ್ಶನಗಳಿಗೇ ವ್ಯವಸ್ಥಾಪಕರು ಮತ್ತು ನಾಟಕ ತಂಡದವರು ತೃಪ್ತಿಪಟ್ಟುಕೊಳ್ಳಬೇಕಾಯಿತು.

'ಮಾರಿಹಬ್ಬ' ಒಂದು ರಾಜಕೀಯ ನಾಟಕ. ಎಲ್ಲಾ ಪಕ್ಷಗಳ ಆಡಳಿತಗಳನ್ನೂ, ಜನರ ಕಿತ್ತುತಿನ್ನುವ ಸಮಸ್ಯೆಗಳ ಬಗ್ಗೆ ಅವುಗಳ 'ಕಾರ್ಯಕ್ರಮ'ಗಳ ನಿಷ್ಪ್ರಯೋಜಕತೆಯನ್ನೂ ಮನಗಂಡಿರುವ ಶ್ರೀಸಾಮಾನ್ಯ ಮತದಾರರು ಈ ಚುನಾವಣೆಗಳ ಪೊಳ್ಳುತನವನ್ನು ಅರ್ಥಮಾಡಿಕೊಂಡು 'ಮತ' ಚಲಾಯಿಸಲು ಹೋಗುವುದನ್ನೇ ಕೈ ಬಿಡುತ್ತಿರುವುದರ ಹಿನ್ನೆಲೆಯಲ್ಲಿ ಈ ನಾಟಕದ ತಿರುಳು ರೂಪುಗೊಂಡಿದೆ

ನಾನಾ ಪಕ್ಷಗಳು ಪ್ರತಿ ಚುನಾವಣೆಗಳಲ್ಲೂ ಹೊಸ ಹೊಸ ಘೋಷಣೆಗಳನ್ನೂ ಭರವಸೆಗಳನ್ನೂ ಕೊಟ್ಟು ಕೊಟ್ಟು ಮೋಸಗೊಳಿಸುವುದನ್ನು ನೋಡಿ ಅನುಭವಿಸಿ, ವಿದ್ಯಾವಂತರು–ಶ್ರೀಸಾಮಾನ್ಯರೆನ್ನದೆ ಪ್ರತಿಯೊಬ್ಬರೂ ಭ್ರಮನಿರಸನಹೊಂದಿದ್ದು, "ಯಾಕೆ ಓಟು ಹಾಕಬೇಕು?" ಎಂಬ ನಿಲುವಿಗೆ ಬಂದಿದ್ದಾರೆ. ಇಲ್ಲಿ, ಯಾವುದೇ ರೀತಿ ಸಂಘಟನೆಯಿಲ್ಲದ ಸಾಮಾನ್ಯ ಮತದಾರನ ಬವಣೆ, ಶೋಷಣೆ, ಅಸಹಾಯಕತೆ, ಹತಾಶೆಗಳು ಬಹುಮಟ್ಟಿಗೆ ಸಹಜವಾಗಿ ಬಿಂಬಿತವಾಗಿವೆ.

ಆದರೆ ಹೀಗೆ ಎಲ್ಲರೂ ಓಟು ಹಾಕುವುದನ್ನೇ ನಿಲ್ಲಿಸಿ ಬಿಟ್ಟರೆ ಹೇಗೆ? ಎಂಬುದು, ಈ ನಾಟಕದಲ್ಲಿ ಬರುವ 'ಪ್ರಜ್ಞಾವಂತ' ರಾಜಕೀಯ ಕಾರ್ಯಕರ್ತನ ಮೂಲಕ ಪ್ರಕಟಗೊಳ್ಳುವ ನಾಟಕಕಾರನ ಅಳಲು.

ಅದಕ್ಕೆ ನಾಟಕಕಾರ ಸೂಚಿಸುವ ಪರಿಹಾರವೆಂದರೆ, ಓಟು ಹಾಕುವಾಗ ಮತದಾರ ಯಾವುದೇ ಆಮಿಷಕ್ಕೆ, ಭರವಸೆಗೆ ಬಲಿಯಾಗಬಾರದು ; ಅಭ್ಯರ್ಥಿ ತಾನು ಈಡೇರಿಸಬಹುದಾದ ಕಾರ್ಯಗಳ ಬಗ್ಗೆ ಮಾತ್ರ ಭರವಸೆ ಕೊಡಬೇಕು, ಈಡೇರಿಸಲಾಗದ ಭರವಸೆ ಕೊಡಬಾರದು ಎಂದು ಅವನಿಗೆ ಮತದಾರ ತಾಕೀತು ಮಾಡಬೇಕು; ಚುನಾಯಿತ ಪ್ರತಿನಿಧಿ ತನ್ನ ಕ್ಷೇತ್ರ ಮರೆತು ದಿಲ್ಲಿಯಲ್ಲಿ ಹೋಗಿ ಕುಳಿತರೆ, ಮತದಾರ ಹೋಗಿ ಅವನನ್ನು ಎಳೆತಂದು, "ನಿನ್ನ ಕೆಲಸ ಇಲ್ಲಿ, ಕ್ಷೇತ್ರದಲ್ಲಿ. ದಿಲ್ಲಿಯಲ್ಲಲ್ಲ" ಎಂದು ಅವನನ್ನು ಎಳೆದು ತಂದು ಕೆಲಸ ಮಾಡಿಸಿಕೊಳ್ಳಬೇಕು; ಮತ್ತು ಸರಿಯಾದ, ಯೋಗ್ಯನಾದ ವ್ಯಕ್ತಿಗೆ ಮಾತ್ರ ಓಟು ಹಾಕಬೇಕು, ಅನರ್ಹನಿಗೆ ಹಾಕಬಾರದು....ಇತ್ಯಾದಿ.

ಸರಿ. ಕೇಳುತ್ತಿದ್ದ ರೈತ ಚಪ್ಪಲಿ ಹಿಡಿದು ಹೊರಡುತ್ತಾನೆ. "ಎಲ್ಲಿಗೆ ಹೊರಟೆ?" ಕಾರ್ಯಕರ್ತ ಕೇಳುತ್ತಾನೆ. "ದಿಲ್ಲಿಗೆ. ಅವನನ್ನು ಎಳೆದುಕೊಂಡು ಬರಲಿಕ್ಕೆ."

"ಛೆಛೆಛೇಛೆ, ಎಲ್ಲಾದರೂ ಉಂಟೆ? ಅವನು ನಿನ್ನೊಬ್ಬನಿಗೇ ಅಲ್ಲ, ನಿನ್ನ ಹಾಗೇ ಸುಮಾರು ೫ ರಿಂದ ೧೦ ಲಕ್ಷದಷ್ಟು ಜನರಿಗೆ ಪ್ರತಿನಿಧಿ. ಅವನನ್ನು ಹಾಗೆಲ್ಲ ಅವಮಾನಿಸಬಾರದು, ಗೌರವ ಕೊಡಬೇಕು. ಎಲ್ಲರೂ ಒಟ್ಟಾಗಿ ಅವನನ್ನು ಕ್ಷೇತ್ರಕ್ಕೆ ಕರೆಸಿಕೊಳ್ಳಬೇಕು...."

ಪಾಪ, ಬಡ ಮತದಾರ ಅದು ಹೇಗೆಂದು ಕೇಳುವುದಿಲ್ಲ; ಒಪ್ಪಿಕೊಂಡು ಬಿಡುತ್ತಾನೆ—ನಾಟಕದಲ್ಲಿ.

ಆದರೆ ನಾಟಕ ನೋಡುತ್ತ ನಿಂತ ಜನ ತಮ್ಮಲ್ಲೇ ಕೇಳಿಕೊಳ್ಳತೊಡಗುತ್ತಾರೆ— ಅದು ಹೇಗೆ ಅವನನ್ನು ದಿಲ್ಲಿಯಿಂದ ಕರೆತರುವುದು? ಅಲ್ಲಿಗೆ ಹೋಗಿಬರಲು ಮತದಾರನಲ್ಲಿ ಹಣವಿದೆಯೆ.? ಇಲ್ಲೇ ಕುಳಿತು ಕರೆಸುವುದು ಹೇಗೆ? ನೂರಿನ್ನೂರು ಜನ ಸೇರಿ ಒತ್ತಾಯಿಸಿದರೆ ಬರುವುದಿಲ್ಲ. ಅದಕ್ಕಿಂತ ಹೆಚ್ಚು ಜನರನ್ನು ಸೇರಿಸುವುದು ಕಷ್ಟ; ಹಾಗೊಂದು ವೇಳೆ ಸಾವಿರಗಟ್ಟಲೆ ಜನ ಸೇರಿದರೆ ಗೋಲಿಬಾರ್ ಮಾಡುತ್ತಾರೆ. ಇಷ್ಟಕ್ಕೂ ಅವನಿಗೆ ತನ್ನ ಕೆಲಸ ಎಲ್ಲಿ ಎಂಬುದು ಗೊತ್ತಿಲ್ಲದೆಯೇನಿಲ್ಲವಲ್ಲ....

ಇನ್ನು, ಅವನಿಗೆ ಸಾಧ್ಯವಿಲ್ಲದ ಭರವಸೆ ಕೊಡಬೇಡವೆಂದರೆ, ಒಂದೋ ಅವನು ಯಾವ ಜವಾಬ್ದಾರಿಯನ್ನೂ ಹೊರುವುದಿಲ್ಲ. ಇಲ್ಲವೆ—ಎಲ್ಲ ಭರವಸೆಗಳನ್ನೂ ಈಡೇರಿಸುತ್ತೇನೆ ಎಂದೇ ಹೇಳುತ್ತಾನೆ. ಏಕೆಂದರೆ ಅವೆಲ್ಲವೂ ಜನರ ತುರ್ತಿನ ಅಗತ್ಯಗಳೇ ತಾನೆ? "ಸ್ವಲ್ಪ ತಾಳಿ" ಎಂದು ಮಾತ್ರ ಹೇಳುತ್ತಾ ಹೋಗುತ್ತಾನೆ, ಅಷ್ಟೇ....

ಮತ್ತೆ, ಚುನಾವಣೆಗೆ ನಿಂತ ಎಲ್ಲರೂ ಕಳ್ಳರು, ಸುಳ್ಳರು; ತಪ್ಪಿದರೆ ಬರೀ ಭಾಷಣ ವೀರರು—ಇಷ್ಟೇ ಆಗಿರುವುದು, ನಮ್ಮ ಕಣ್ಣ ಮುಂದಿನ ಸತ್ಯ. ಅವರಲ್ಲೇ ಒಬ್ಬನನ್ನು ಇದ್ದುದರಲ್ಲೇ ದಕ್ಷ, ಯೋಗ್ಯ ಎಂದು ಆರಿಸಬೇಕು ಹೊರತು, ನಿಜವಾದ ಯೋಗ್ಯನನ್ನು ಆರಿಸಲು ಅವಕಾಶವೇ ಇರುವುದಿಲ್ಲವಲ್ಲ....

....ಪ್ರೇಕ್ಷಕರ ಈ ಸಂದೇಹಗಳಿಗೆ ನಾಟಕದಲ್ಲಿ ಉತ್ತರ ಸಿಗುವುದಿಲ್ಲ. ಜನ ಭರವಸೆಗಳಿಗೆ ಮಾರುಹೋಗಿ ಇಲ್ಲವೇ ಆಮಿಷಕ್ಕೆ ಬಲಿಯಾಗಿ ಅನರ್ಹರನ್ನು ಆಯ್ಕೆ ಮಾಡುತ್ತಿರುವುದೇ ಪ್ರಸಕ್ತ ಪದ್ಧತಿಯ ದೋಷ; ಇದು ಸರಿಯಾದರೆ ದೇಶದ, ಅಂದರೆ ಜನರ ಸಮಸ್ಯೆಗಳು ಬಗೆಹರಿಯುತ್ತವೆ—ಎಂಬುದು ನಾಟಕದ ಆಶಯವಾಗಿ ಕಾಣುತ್ತದೆ.

ನಿಜವಾಗಿಯೂ ದೇಶವನ್ನು ಆಳುತ್ತಿರುವುದು ಯಾರು? ದೊಡ್ಡ ಬಂಡವಾಳಶಾಹಿ, ದೊಡ್ಡ ಭೂ ಸ್ವಾಮಿ ವರ್ಗಗಳನ್ನೊಳಗೊಂಡ ಆಳುವ ವರ್ಗ ಹಾಗೂ ಅವರ ವಿದೇಶಿ ಯಜಮಾನರು. ಅವರ ಹಿತಾಸಕ್ತಿಗನುಗುಣವಾಗಿ ಕಾರ್ಯ ನಿರ್ವಹಿಸುವುದಷ್ಟೇ ರಾಜಕಾರಣಿ, ಅಧಿಕಾರಶಾಹಿ, ಕೋರ್ಟು, ಪೋಲೀಸು ಮತ್ತು ಮಿಲಿಟರಿ—ಇವುಗಳನ್ನೊಳಗೊಂಡ 'ಸರ್ಕಾರ' ಎನ್ನುವ ವ್ಯವಸ್ಥೆಯ ಕೆಲಸ. ಈ ಒಟ್ಟು ವ್ಯವಸ್ಥೆ ಆ ಆಳುವ ವರ್ಗಗಳ ಒಂದು ಮ್ಯಾನೇಜರ್ ಕಛೇರಿಯಿದ್ದಂತೆ ಮಾತ್ರ. ಆ ಆಳುವ ವರ್ಗಗಳ ಹಿತಾಸಕ್ತಿಯನ್ನು ಮಣಿಸಿ, ಜನರ ಹಿತಾಸಕ್ತಿಗೆ ಅನುಗುಣವಾಗಿ ಸರ್ಕಾರ ಕೆಲಸ ಮಾಡುವಂತೆ ಮಾಡುವುದು ಹೇಗೆಂಬುದೇ ಇಂದು ಜನತೆಯ ಮುಂದಿರುವ ಸವಾಲು —ಎನ್ನುವ ಸರಳ ಸತ್ಯವನ್ನು ನಾಟಕಕಾರ ಒಪ್ಪಿಕೊಳ್ಳುವುದಿಲ್ಲ.

ಒಟ್ಟಿನಲ್ಲಿ, ಚುನಾವಣೆ ಎಂಬ ಪೊಳ್ಳು ವ್ಯವಸ್ಥೆಯ ಬಗ್ಗೆ ಪೂರ್ತಿ ಭ್ರಮ ನಿರಸನಗೊಂಡಿರುವ ಜನಸಾಮಾನ್ಯರಲ್ಲಿ ಮತ್ತೆ ಆ ಭ್ರಮೆಯನ್ನು ತುಂಬಿ, ಈ ಶೋಷಕ ವ್ಯವಸ್ಥೆಯನ್ನು ಉಳಿಸಿಕೊಂಡು ಹೋಗಲು ಅದರ ಬೆಂಬಲಿಗರು ಬೀದಿ ನಾಟಕಕ್ಕೂ ಇಳಿಯಬೇಕಾಯಿತೆಂದರೆ, ಜನರ ಭ್ರಮನಿರಸನ ಎಷ್ಟು ತೀವ್ರವಾಗಿದೆ ಎಂಬ ಅರಿವು, ಅಶ್ಚರ್ಯ ಈ ನಾಟಕ ನೋಡಿದಾಗ ಮೂಡುತ್ತದೆ.

ಆದರೆ ನಾಟಕದಲ್ಲಿನ ತಾಂತ್ರಿಕ ಅಂಶಗಳು ಸಾಕಷ್ಟು ಉತ್ತಮವಾಗಿವೆ. ಸಂಭಾಷಣೆಗಳು ಚುರುಕಾಗಿವೆ. ಅಭಿನಯ ಕೂಡ ಉತ್ತಮ.

—ಒಬ್ಬ ಪ್ರೇಕ್ಷಕ.

"ಜನತೆಯ ಪ್ರಜಾಪ್ರಭುತ್ವ ಮತ್ತು ಚುನಾವಣೆಗಳು"

# 'ಮುಂಜಾವು' ಪತ್ರಿಕೆಯ ಸಾಮಾಜಿಕ ಜವಾಬ್ದಾರಿಯನ್ನು ನಿರೂಪಿಸುವ ಲೇಖನ

ಪ್ರಿಯರೆ,

"ಜನತೆಯ ಪ್ರಜಾಪ್ರಭುತ್ವ ಮತ್ತು ಚುನಾವಣೆಗಳು" ಲೇಖನ ಜೂನ್ ೯ರ 'ಮುಂಜಾವು'ನಲ್ಲಿ ಓದಿದೆ. ಆ ಲೇಖನದ ಬಗ್ಗೆ ಚರ್ಚೆಗಾಗಿ ಆಹ್ವಾನಿಸಿದ್ದನ್ನೂ ಓದಿದೆ. ತುಂಬಾ ಒಳ್ಳೆಯ ಲೇಖನ. 'ಮುಂಜಾವು'ನ ಸಾಮಾಜಿಕ ಜವಾಬ್ದಾರಿಯನ್ನು ನಿರೂಪಿಸುವಂತೆ ಬಂದಿದೆ.

## ವೇದಿಕೆ

ಆ ಲೇಖನದಲ್ಲಿ ನಾನು ಚರ್ಚೆ ಮಾಡಬಹುದಾದ ಅಂಶಗಳಿಲ್ಲ. ಬದಲಿಗೆ ಬೆಂಬಲಿಸಬಹುದಾದವೇ ಹೆಚ್ಚು. "ಎರಡನೆಯ ಸ್ವಾತಂತ್ರ್ಯ ಸಂಗ್ರಾಮ ಕೂಡ ಮೊದಲನೆಯದರ ಹಾಗೇ ವಿಪುಲ ರಕ್ತ ತರ್ಪಣವನ್ನು ಬಯಸುತ್ತದೆನ್ನುವುದೂ........ ಇಂಥ ಸ್ವಾತಂತ್ರ್ಯ ಸಂಗ್ರಾಮಕ್ಕೂ ಈ ಚುನಾವಣೆಗೂ ಯಾವ ಸಂಬಂಧವೂ ಇಲ್ಲ" ತುಂಬಾ ಅರ್ಥಪೂರ್ಣವಾದ ಮಾತುಗಳು. 'ಮುಂಜಾವು' ಇದೇ ಮುಂಜಾವಿನ ಹಾದಿಯಲ್ಲಿ ಮುನ್ನಡೆಯಲೆಂದು ಹಾರೈಕೆಗಳು.

'ಓಟು-ಪಾವಿತ್ರ್ಯವೆಂಬ ಭ್ರಮೆ' ಪತ್ರದಲ್ಲಿ 'ಶೃಂಗ' ಸಹ ಸಾಕಷ್ಟು ವಿಚಾರಪೂರ್ಣವಾಗಿ ಈ ವ್ಯವಸ್ಥೆಯ ಅಂತರಂಗವನ್ನು ಬಿಚ್ಚಿಟ್ಟಿದ್ದಾರೆ.

. ಚರ್ಚೆ ಯಾವ ರೀತಿ ನಡೆಯುತ್ತದೆ. ಕೊಪ್ಪದ-ಚಿಕ್ಕಮಗಳೂರಿನ ಬುದ್ಧಿ ಜೀವಿ ಜನರ ಪ್ರತಿಕ್ರಿಯೆ ಏನು—ಎಂಬುದನ್ನು ತಿಳಿಯಲು ಕುತೂಹಲಿಯಾಗಿದ್ದೇನೆ.

—ಬಂಜಗೆರೆ ಜಯಪ್ರಕಾಶ್,
ಬೆಂಗಳೂರು.

### ಬೊಗಳೆ ಪಕ್ಷಗಳ ಬಣ್ಣ ಬಯಲು

ಪ್ರಿಯರೆ,

ಪ್ರಸ್ತುತ ಚುನಾವಣೆಯ ಕುರಿತು ಜೂನ್ ೯ರ "ಮುಂಜಾವು" ಲೇಖನ ನನಗೆ ಬಹಳ ಹಿಡಿಸಿತು ನೀವು ಯಾವುದೇ ಪಕ್ಷವನ್ನು ಹೊಗಳದೆ ಪಕ್ಷಗಳ ಬೊಗಳೆಯನ್ನು ಚಿತ್ರಿಸಿದ್ದೀರಿ. ಯಾರು ಅಧಿಕಾರಕ್ಕೆ ಬಂದರೂ ಇಷ್ಟೇ ಎಂದು ತಿಳಿದಿದ್ದರೂ ಸಹ ನಮ್ಮ ಜನ ಸಹಾನುಭೂತಿಯಿಂದ ಪ್ರತಿಸಲ ಮತ ಚಲಾಯಿಸುತ್ತಿರುವುದು ಒಂದು ವಿಶೇಷ

ಇಂತಹ ಉತ್ತಮ ಬರಹಗಳು ಇನ್ನೂ ಹೆಚ್ಚಾಗಿ ಮೂಡಿಬರಲಿ.

—ಎಚ್. ಎಂ. ಗಿರೀಶ್, ಹುಲಿಗರಡಿ

## ಜಿಲ್ಲಾ ಸಹಕಾರ ಯೂನಿಯನ್ ಅಧ್ಯಕ್ಷರಾಗಿ ನೀಲಕಂಠಭಟ್

ಚಿಕ್ಕಮಗಳೂರು : ಜಿಲ್ಲಾ ಸಹಕಾರ ಯೂನಿಯನ್ನಿನ ಅಧ್ಯಕ್ಷರಾಗಿ ಹರಿಹರಪುರದ ಜೆ. ಪಿ. ನೀಲಕಂಠಭಟ್ ಈಚೆಗೆ ನಡೆದ ಸಂಘದ ಸಭೆಯಲ್ಲಿ ಆಯ್ಕೆಯಾಗಿದ್ದಾರೆ.

## ಡಾ|| ಜಗದೀಶ್‌ರವರ ರೇಡಿಯೋ ಕಾರ್ಯಕ್ರಮ

ಕೊಪ್ಪ : ಸ್ಥಳೀಯ ಪಶುವೈದ್ಯಾಧಿಕಾರಿ ಡಾ|| ಎಚ್. ಆರ್. ಜಗದೀಶ್‌ರವರ ಭಾವಗೀತೆಗಳ ಕಾರ್ಯಕ್ರಮ ದಿನಾಂಕ. ೧೯-೬-೯೧ರ ಬುಧವಾರ ರಾತ್ರಿ ೯-೧೫ಕ್ಕೆ ಭದ್ರಾವತಿ ಆಕಾಶವಾಣಿ ನಿಲಯದಿಂದ ಮೂಡಿ ಬರಲಿದೆ.

## ಕೊಪ್ಪ ಆಯುರ್ವೇದ ಕಾಲೇಜು ವಿದ್ಯಾರ್ಥಿಗಳ ಪಾಲಿನ 'ವಿಲನ್'

# ಕೊಕ್ಕರ್ಣೆ ಕುಶಲ ಶೆಟ್ಟರ ಕ್ರೂರ ಕೊಲೆ

ಕೊಪ್ಪ ಆಯುರ್ವೇದ ಕಾಲೇಜಿನ ಮಾಜಿ 'ಸಂಸ್ಥಾಪಕ' ಕೊಕ್ಕರ್ಣೆಯ ಬಿ. ಕುಶಲಶೆಟ್ಟಿ ಜೂನ್ ೧೦ರ ಬೆಳಗಿನ ಜಾವ ತಮ್ಮ ಅಲಾಯಿದಾ ಮನೆಯಲ್ಲಿ ಕ್ರೂರವಾಗಿ ಕೊಲೆಯಾಗಿದ್ದಾರೆ.

ಅಂದು ಬೆಳಗಿನ ೨-೩ ಗಂಟೆಯ ನಡುವೆ ಕೊಲೆ ನಡೆದಿದ್ದು, ಅತಿ ಸಮೀಪದಿಂದ ಅವರ ಬೆನ್ನಿಗೆ ಗುಂಡು ಹೊಡೆದು ಕೊಲ್ಲಲಾಗಿದೆ. ಹಂತಕರು ಮಾಡಿನ ಹೆಂಚು ತೆಗೆದು ಒಳ ಪ್ರವೇಶಿಸಿರಬೇಕೆಂದು ಶಂಕಿಸಲಾಗಿದೆ.

ಹೆಂಡತಿ, ಇಬ್ಬರು ಗಂಡು-ಇಬ್ಬರು ಹೆಣ್ಣು ಮಕ್ಕಳನ್ನು ತೊರೆದು ಅವರು ಪ್ರತ್ಯೇಕ ವಾಸಿಸುತ್ತಿದ್ದರೆಂದೂ, ಕೌಟುಂಬಿಕ ವಿವಾದವೇ ಕೊಲೆಗೆ ಕಾರಣವೆಂದೂ, ಈ ಸಂಬಂಧ ಶೆಟ್ಟರ ಮಗನನ್ನು ಬಂಧಿಸಲಾಗಿದೆಯೆಂದೂ ಹೇಳಲಾಗಿದೆ.

**ಆಯು|| ಕಾಲೇಜು ಹಸ್ತಾಂತರ**

ಕೊಪ್ಪದ ಆಯುರ್ವೇದ ಕಾಲೇಜನ್ನು ಎಷ್ಟೆಲ್ಲ ಅವಾಂತರ, ಹಗರಣಗಳ ನಂತರ ಶೆಟ್ಟರು ತೀರಾ ಇತ್ತೀಚೆಗಷ್ಟೇ ಆರೂರು ಶಿಕ್ಷಣ ಟ್ರಸ್ಟ್‌ಗೆ ಹಸ್ತಾಂತರಿಸಿದ್ದರು.

ಇಲ್ಲಿನ ವಿದ್ಯಾರ್ಥಿಗಳಿಗೆ ಬೇರೆ ಕಡೆಗೆ ವರ್ಗಾವಣೆ ಕೊಡುವುದಾಗಿ ಭರವಸೆ ನೀಡಿದ್ದ ಕುವೆಂಪು ವಿ.ವಿ. ಅಧಿಕಾರಿಗಳು ಈವರೆಗೂ ಕೊಟ್ಟಿಲ್ಲ ಇತ್ತ ಕೊಪ್ಪದ ಕಾಲೇಜಿನ ಮಾನ್ಯತೆ ರದ್ದುಗೊಳಿಸಿರುವುದಾಗಿ ಪತ್ರಿಕೆಗಳಲ್ಲಿ ಹೇಳಿಕೆ ಕೊಟ್ಟರೂ ಕಾಲೇಜಿಗೆ ಆ ಸಂಬಂಧ ಯಾವುದೇ ಆದೇಶ ಬಂದಿಲ್ಲವೆನ್ನುತ್ತಾರೆ ಪ್ರಿನ್ಸಿಪಾಲರು.

ಹೀಗಾಗಿ, ಅತ್ತ ಬಹುತೇಕ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಊರಿಗೆ ಹೋಗಿದ್ದು, ಉಳಿದ ಹದಿಮೂರೋ ಹದಿನಾಲ್ಕೋ ಮಂದಿಗೆ "ತರಗತಿ ನಡೆಸಿ" ಇದೀಗ ಪರೀಕ್ಷೆಯನ್ನೂ ಕಟ್ಟಿಸಲಾಗಿದೆ. ನಾಲ್ಕೂ ತರಗತಿಗಳಲ್ಲಿದ್ದ ಆ ವಿದ್ಯಾರ್ಥಿಗಳ ಪೈಕಿ, ಮೊದಲ ಮತ್ತು ೨ನೇ ವರ್ಷದ ತಲಾ ಐವರು, ೩ನೇ ವರ್ಷದ ಮೂವರು ಮತ್ತು ನಾಲ್ಕನೇ ವರ್ಷದ ಒಬ್ಬರು—ಒಟ್ಟು ೧೪ ಮಂದಿ ಮಾತ್ರ ಪರೀಕ್ಷೆ ಕಟ್ಟಿದ್ದಾರೆಂದು ವಿದ್ಯಾರ್ಥಿ ಮೂಲಗಳು ತಿಳಿಸಿವೆ. ಪರೀಕ್ಷೆ ಕಟ್ಟಲು ಕಡೇ ದಿನಾಂಕ ಜೂನ್ ೧೦ಕ್ಕೆ ಮುಗಿದಿದೆ.

ಮಿಕ್ಕ ೭೪ ವಿದ್ಯಾರ್ಥಿ-ವಿದ್ಯಾರ್ಥಿನಿಯರ ಭವಿಷ್ಯ—ಅವರಿಂದ ಕಂತೆ ಕಂತೆ ಗಂಟು ನುಂಗಿ ಕಡೆಗೆ ಕ್ರೂರವಾಗಿ ಮಣ್ಣಾಗಿ ಹೋದ ಕುಶಲ ಶೆಟ್ಟರ ಜೊತೆಯೇ ಅದೂ ಮಣ್ಣಾಯಿತೋ ಏನೋ !?

# ಅರಣ್ಯ ಇಲಾಖೆಯಿಂದ ಉಚಿತ ಸಸಿ ವಿತರಣೆ

ಪ್ರತೀ ಬಾರಿಯಂತೆ ಈ ಬಾರಿಯೂ ಅರಣ್ಯ ಇಲಾಖೆಯು ಸಾರ್ವಜನಿಕರಿಗೆ ಉಚಿತವಾಗಿ ಸಸಿಗಳ ವಿತರಣೆಯನ್ನು ಪ್ರಾರಂಭಿಸಿದೆ. ಈ ಹಿಂದೆ ಏಕ ಜಾತಿಯ ಸಸ್ಯಗಳನ್ನು (ಅಕೇಶಿಯಾ, ನೀಲಗಿರಿ) ಮಾತ್ರ ಹಂಚುತ್ತಿದ್ದು ಈಗ ವಿವಿಧ ಜಾತಿಯ ಉಪಯುಕ್ತವಾದ ನಾಟ, ಉರುವಲು, ಗೊಬ್ಬರ, ಮೇವು, ಫಲ-ಪುಷ್ಪ, .ಜೇನು ಕೃಷಿಗೆ ಉಪಯುಕ್ತವಾದ ಅನೇಕ ಜಾತಿಯ ಯೋಗ್ಯ ಸಸಿಗಳನ್ನು ಒಬ್ಬರಿಗೆ ತಲಾ ೨೫೦ ರಂತೆ ಉಚಿತವಾಗಿ ಹಂಚಲಾಗುತ್ತದೆ.

ಈ ಸದವಕಾಶವನ್ನು ಸಾರ್ವಜನಿಕರು, ರೈತಾಪಿ ಬಂಧುಗಳು, ಇನ್ನಿತರ ಪರಿಸರಾಸಕ್ತರು ಸಸಿಗಳನ್ನು ಪಡೆದು ತಮ್ಮ ಹೊಲಗದ್ದೆ, ಮನೆಗಳ ಮುಂದೆ, ಹಿತ್ತಲುಗಳಲ್ಲಿ ಹಾಗೂ ಬಂಜರು ಭೂಮಿಯಲ್ಲೆಲ್ಲಾ ಸಸಿಗಳನ್ನು ನೆಟ್ಟು ಕೃಷಿ ಕಾಡಿಗೆ ಪ್ರೋತ್ಸಾಹ ನೀಡಿ ರಾಷ್ಟ್ರೀಯ ಅರಣ್ಯ ಸಂಪತ್ತನ್ನು ಅಭಿವೃದ್ಧಿ ಪಡಿಸಲು ಸಹಕರಿಸಬೇಕಾಗಿ ಅಧಿಕಾರಿಗಳು ವಿನಂತಿಸಿದ್ದಾರೆ.

ದೊರೆಯುವ ಸಸಿಗಳು ಈ ರೀತಿ ಇವೆ : ಗೇರು, ಅಂಟುವಾಳ, ಸಿಲ್ವರ್, ಸಾಗುವಾನಿ, ಸೀಗೆ, ಕರಿಬೇವು. ನುಗ್ಗೆ, ಬೇವು, ಗಾಳಿ, ಬಳಂಜೆ, ಗರಿಗೆ, ಬೀಲ, ಹುಣಿಸೆ, ಬಿದಿರು, ಸಕ್ಕರೆಪಟ್ಟೆ ಹಲಸು, ಮಾವು, ಸೀತಾಫಲ, ಹೊಂಗೆ, ಮತ್ತಿ, ಹೊನ್ನೆ, ನಂದಿ, ಸಂಪಿಗೆ, ಕಿರಾಲ್‌ಭೋಗಿ, ನೆಲ್ಲಿ, ಶಿವನೆ, ನಾಗಸಂಪಿಗೆ, ಮಹಾಗನಿ, ನೇರಲು, ಚಕರಂದ, ಅರಳಿ, ಮುತ್ತುಗ, ಪಪ್ಪಾಯಿ, ಬಸವನ ಪಾದ ಇತ್ಯಾದಿಗಳಿವೆ. ನಿಗದಿತ ಅರ್ಜಿ ಫಾರಂಗಳನ್ನು ಅರಣ್ಯ ಇಲಾಖೆಯಲ್ಲಿ ಕೇಳಿ ಪಡೆಯಬಹುದು

ಇತ್ತೀಚಿನ ಕೆಲವು ವರ್ಷದಿಂದ ಅನೇಕ ಜನ ಪಟ್ಟಣವಾಸಿಗಳು, ಮಹಿಳೆಯರು ಮತ್ತು ಪರಿಸರ ಪ್ರೇಮಿಗಳು ತಮಗೆ ಬೇಕಾದ ೧೦-೨೦ ಗಿಡಗಳಿಗೆ ಅರಣ್ಯ ಇಲಾಖೆ ಮತ್ತು ಹತ್ತಾರು ಕಿಲೋ ಮೀಟರ್ ದೂರದ ಸಸ್ಯ ಕ್ಷೇತ್ರದಿಂದ ತಂದು ನೆಡಲು ಅನಾನುಕೂಲವೆಂದು ದೂರುತ್ತಾರೆ. ಈ ವಿಷಯವನ್ನು ವಲಯ ಅರಣ್ಯಾಧಿಕಾರಿಗಳಾದ ಚಂದ್ರಶೇಖರ ಆಚಾರ್ ಅವರ ಗಮನಕ್ಕೆ ತಂದಾಗ, ಈ ಬಾರಿ ವಿವಿಧ ಜಾತಿಯ ೨೦೦೦ ದಷ್ಟು ಸಸಿಗಳನ್ನು ನಮ್ಮ ಕೃಷಿ ಕ್ಷೇತ್ರಕ್ಕೆ ತಂದುಕೊಟ್ಟಿದ್ದು ಸ್ಥಳೀಯರಿಗೆ ಹಂಚಲು ತಿಳಿಸಿದ್ದಾರೆ. ಆಸಕ್ತರು ನೇರವಾಗಿ ನಮ್ಮ ಕೃಷಿ ಕ್ಷೇತ್ರಕ್ಕೆ (ಬಾಳ್ಗಡಿ ರಸ್ತೆ, ಹರಂದೂರು) ಆಗಮಿಸಿ ತಮಗೆ ಬೇಕಾದ ಗಿಡಗಳನ್ನು ಉಚಿತವಾಗಿ ಪಡೆಯಬಹುದು. ೧೦ರಿಂದ ೨೦ ಗಿಡ ಬೇಕಾದವರಿಗೆ ಮಾತ್ರ ಈ ಅವಕಾಶವಿದ್ದು ಕೂಡಲೇ ಬಂದು ಪಡೆಯಿರಿ.

ವಿ. ಸೂ: ಸಸಿಗಳನ್ನು ಪಡೆದವರು ಕೊಟ್ಟ ಸಮೇತ ಗಿಡವನ್ನು ಒಯ್ಯಬೇಕು. ಯಾವುದೇ ಕಾರಣಕ್ಕೆ ಕೊಟ್ಟೆಯಿಂದ ಗಿಡಗಳನ್ನು ಕಿತ್ತು ಹಾಳುಮಾಡುವವರಿಗೆ ಗಿಡಗಳನ್ನು ಕೊಡುವುದಿಲ್ಲ.

—ವಸಂತ ಕುಮಾರ್ ಹರ್ಡೀಕರ್,
ಬಾಳ್ಗಡಿ ರಸ್ತೆ, ಹರಂದೂರ್, ಕೊಪ್ಪ.

## ಡಿಪ್ಲೊಮಾ ಪ್ರವೇಶಕ್ಕೆ ಅರ್ಜಿ ಸಲ್ಲಿಸುವ ದಿನಾಂಕ ವಿಸ್ತರಣೆ

ತೀರ್ಥಹಳ್ಳಿ : ೧೯೯೧-೯೨ನೇ ಸಾಲಿನ ಮೊದಲನೇ ಡಿಪ್ಲೋಮಾ ಸಿವಿಲ್, ಎಲೆಕ್ಟ್ರಿಕಲ್ ಮತ್ತು ಮೆಕಾನಿಕಲ್ ತರಗತಿಗಳಿಗೆ ಪ್ರವೇಶ ಕೋರುವ ಅಭ್ಯರ್ಥಿಗಳು ದಿನಾಂಕ : ೨೮-೬-೯೧ರ ಒಳಗೆ ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಹೆಚ್ಚಿನ ವಿವರಗಳನ್ನು ಪಾಲಿಟೆಕ್ನಿಕ್, ಕಛೇರಿ, ಕೊಪ್ಪ ರಸ್ತೆ, ತೀರ್ಥಹಳ್ಳಿ ಇಲ್ಲಿ ಪಡೆಯಬಹುದು.

## ಯಕ್ಷಗಾನ ತರಗತಿಗಳು ಜುಲೈ ೧೫ ರಿಂದ ಆರಂಭ

ಹರಿಹರಪುರ : ಇಲ್ಲಿನ ಮಲೆನಾಡು ಯಕ್ಷಗಾನ ಶಿಕ್ಷಣ ಕೇಂದ್ರದಲ್ಲಿ ಜುಲೈ ೧೫ರಿಂದ ಯಕ್ಷಗಾನ ತರಗತಿಗಳು ಆರಂಭವಾಗುತ್ತವೆ ೧೦-೭-೯೧ ರೊಳಗೆ ಅರ್ಜಿ ದನ ಪತ್ರವನ್ನು ಸಲ್ಲಿಸಿ ವಿದ್ಯಾರ್ಥಿಗಳು ಸೇರಬೇಕು. ಹೆಚ್ಚಿನ ವಿವರಗಳಿಗೆ ಕೇಂದ್ರದ ಖಜಾಂಚಿ ಶಿವರಾಮ ಶೇರಿಗಾರ್, ಹರಿಹರಪುರ ಇವರನ್ನು ಸಂಪರ್ಕಿಸಬಹುದು.



~~~~~

ಕನ್ನಡ ಅಂಕಿಗಳನ್ನೇ ಬಳಸಿ

೦ ೧ ೨ ೩ ೪ ೫ ೬ ೭ ೮ ೯

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು : ದೀವಟಿಗೆ ಅಚ್ಚುಕೂಟ, ಕೊ…
~~~~~